# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 224 (281)
ಮಾನ್ಯ ಸದಸ್ಯರ ಹೆಸರು : ಶ್ರೀ ಪಿ.ಆರ್. ರಮೇಶ್ (ನಾಮ ನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 04.03.2020
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು (ಲೋಇ ಮತ್ತು ಸ.ಕ.ಇ)

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಲೋಕೋಪಯೋಗಿ ಇಲಾಖೆಯಲ್ಲಿ ಮಂಜೂರಾದ /ಅಗತ್ಯವಿರುವ ಸಂಖ್ಯೆಗಿಂತ ಹೆಚ್ಚುವರಿಯಾಗಿ ನಿಯಮ-32ರಡಿ ಪದೋನ್ನತಿಯನ್ನು ನೀಡಲಾಗಿದೆಯೇ: ಕಾರ್ಯಪಾಲಕ ಇಂಜಿನಿಯರುಗಳ ಮಂಜೂರಾದ ಹುದ್ದೆಗಳು 600, ಪದೋನ್ನತಿ ನೀಡಿರುವುದು 800, ಇದೇ ರೀತಿಯಲ್ಲಿ ಎಲ್ಲಾ ದರ್ಜೆಯ ಇಂಜಿನಿಯರ್‌ಗಳ ಪದೋನ್ನತಿ ನೀಡಲಾಗಿದೆಯೇ; (ವಾಸ್ತವ ಅಂಕಿ-ಅಂಶಗಳನ್ನು ನೀಡುವುದು) | ಲೋಕೋಪಯೋಗಿ ಇಲಾಖೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮತ್ತು ಇತರೆ ಇಲಾಖೆಗಳಿಂದ ಖಾಲಿ ಹುದ್ದೆಗಳ ಮಾಹಿತಿಯನ್ನು ಪಡೆದು, ಖಾಲಿ ಹುದ್ದೆಗಳ ಎದುರಾಗಿ ಮಾತ್ರ ಕ.ನಾ.ಸೇ.ನಿ ನಿಯಮ 32ರನ್ವಯ ಸ್ವತಂತ್ರ ಪ್ರಭಾರದಲ್ಲಿರಿಸಲಾಗಿರುತ್ತದೆ. ಹೀಗಾಗಿ ಲೋಕೋಪಯೋಗಿ ಇಲಾಖೆಗೆ ಮಂಜೂರಾದ ಹುದ್ದೆಗಳಿಗಿಂತ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ಸಂಖ್ಯೆ ಹೆಚ್ಚಾಗಿರುತ್ತದೆ.<br>**ವಿವರ ಈ ಕೆಳಕಂಡಂತಿದೆ**<br>ಕ್ರ.ಸಂ / ವೃಂದ / ವೃಂದ ಬಲ / ಕಾರ್ಯನಿರತ ಬಲ<br>1. ಸಹಾಯಕ ಕಾರ್ಯಪಾಲಕ ಇಂಜಿನಿಯರ್ / 1454 / 1755<br>2. ಕಾರ್ಯಪಾಲಕ ಇಂಜಿನಿಯರ್ / 314 / 595<br>3. ಅಧೀಕ್ಷಕ ಇಂಜಿನಿಯರ್ / 82 / 120 |
| ಆ | ಲೋಕೋಪಯೋಗಿ ಇಲಾಖೆಯಲ್ಲಿ ಹುದ್ದೆ ನಿರೀಕ್ಷಣೆಯಲ್ಲಿರುವ ಇಂಜಿನಿಯರ್‌ಗಳ ದರ್ಜೆವಾರು ಸಂಖ್ಯೆ ಎಷ್ಟು; ಸರ್ಕಾರದ ಮೇಲೆ ಆಗುವ ಹಣಕಾಸಿನ ಹೊರೆ ಎಷ್ಟು; ಅಂದಾಜಿನ ಪ್ರಕಾರ ಸುಮಾರು 500 ವಿವಿಧ ದರ್ಜೆಯ ಇಂಜಿನಿಯರ್‌ಗಳ ಹುದ್ದೆ ಇಲ್ಲದಿರುವುದು ನಿಜವೇ; (ಅಂಕಿ-ಅಂಶಗಳನ್ನು ನೀಡುವುದು) | ಪ್ರಸ್ತುತ ಯಾವುದೇ ಇಂಜಿನಿಯರುಗಳು ಸ್ಥಳ ನಿರೀಕ್ಷಣೆಯಲ್ಲಿರುವುದಿಲ್ಲ. |
| ಇ | ಮಾನ್ಯ ಮುಖ್ಯಮಂತ್ರಿಗಳಿಂದ ಕಡತದಲ್ಲಿ ವರ್ಗಾವಣೆ ಆದೇಶ ನೀಡಿದಂತಹ ಪ್ರಕರಣಗಳಲ್ಲಿ ಮರು ಸ್ಥಳ ನಿಯುಕ್ತಿಗಾಗಿ ಮಂತ್ರಿಗಳಿಗೆ ಕಡತ ಸಲ್ಲಿಸುವಂತಹ ಸಂಪ್ರದಾಯ ಪಾಲಿಸಲಾಗುತ್ತಿದೆಯೇ; ಇದ್ದಲ್ಲಿ ಇದರಿಂದ ವಿಳಂಬ ಮತ್ತು ಭ್ರಷ್ಟಾಚಾರ ಹೆಚ್ಚುವುದಿಲ್ಲವೇ; (ಸಂಪೂರ್ಣ ಮಾಹಿತಿ ನೀಡುವುದು) | ವರ್ಗಾವಣೆ ನೀತಿಯನ್ವಯ ಮಾನ್ಯ ಇಲಾಖಾ ಸಚಿವರ ಮುಖಾಂತರ ಅನುಮೋದನೆ ಪಡೆದು ಮತ್ತು ಮಾನ್ಯ ಮುಖ್ಯ ಮಂತ್ರಿಯವರಿಂದ ಅನುಮೋದನೆಯಾದ ನಂತರ ವರ್ಗಾವಣೆ ಆದೇಶ ಹೊರಡಿಸಲಾಗುತ್ತಿದ್ದು, ಇದರಿಂದಾಗಿ ಯಾವುದೇ ವಿಳಂಬ ಹಾಗೂ ಭ್ರಷ್ಟಾಚಾರ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಲೋಇ28 ಸೇಎಸು 2020

(ಗೋವಿಂದ ಎಂ ಕಾರಜೋಳ)
ಉಪ ಮುಖ್ಯಮಂತ್ರಿಗಳು
(ಲೋಕೋಪಯೋಗಿ ಮತ್ತು ಸಮಾಜ
ಕಲ್ಯಾಣ ಇಲಾಖೆ)